# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **390** |
| ಉತ್ತರಿಸಬೇಕಾದ ದಿನಾಂಕ | : | 15.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮೀಣ ಪ್ರದೇಶಗಳಲ್ಲಿ ನೀಡುವ ವಸತಿ ಯೋಜನೆಗಳು ಯಾವುವು ; | ರಾಜ್ಯದಲ್ಲಿ ವಸತಿ ರಹಿತರಿಗೆ ಗ್ರಾಮೀಣ ಪ್ರದೇಶದಲ್ಲಿ ವಸತಿ ಸೌಕರ್ಯ ಕಲ್ಪಿಸಲು ಈ ಕೆಳಗೆ ವಿವರಿಸಲಾಗಿರುವ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>**ರಾಜ್ಯ ಪುರಸ್ಕೃತ ಯೋಜನೆಗಳು:**<br>1. ಬಸವ ವಸತಿ ಯೋಜನೆ<br>2. ಡಾ. ಬಿ.ಆರ್. ಅಂಬೇಡ್ಕರ್ ವಸತಿ ಯೋಜನೆ (ಗ್ರಾಮೀಣ)<br>3. ದೇವರಾಜು ಅರಸು ವಸತಿ ಯೋಜನೆ (ಗ್ರಾಮೀಣ)<br>**ಕೇಂದ್ರ ಪುರಸ್ಕೃತ ಯೋಜನೆಗಳು**:<br>1. ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) |
| (ಆ) | ಈ ವಸತಿ ಯೋಜನೆಗಳಲ್ಲಿ ಹಂತವಾರು ಕಾಮಗಾರಿ ಪೂರ್ಣಗೊಂಡು G.P.S ಅಳವಡಿಸಿದ್ದರೂ, ಅನುದಾನ ಬಿಡುಗಡೆ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಇಂದಿರಾ ಮನೆ ಆ್ಯಪ್ ನ ಮುಖಾಂತರ ಜಿ.ಪಿ.ಎಸ್ ಮಾಡಲಾದ ಮನೆಗಳ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು, ಆದರೆ, ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಅನರ್ಹ ಫಲಾನುಭವಿಗಳ ಆಯ್ಕೆ ಕಂಡು ಬಂದಿರುವುದರಿಂದ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 154 ಹೆಚ್‌ಎಎಂ 2019, ದಿನಾಂಕ:16.11.2019 ರ ರೀತ್ಯಾ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಜಿ.ಪಿ.ಎಸ್ ಗೆ ಅಳವಡಿಸಿ, ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ದೃಢೀಕರಿಸಿದ ನಂತರ ಸದರಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು.<br>ಪ್ರಸಕ್ತ ಸಾಲಿನಲ್ಲಿ ಭೌತಿಕ ಪ್ರಗತಿಗನುಗುಣವಾಗಿ ಆಗಸ್ಟ್ 2021 ರ ಅಂತ್ಯದವರೆಗೆ ಡಿಬಿ.ಟಿ ಮುಖಾಂತರ ರೂ.409.62 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.<br>ಮುಂದುವರೆದಂತೆ ವಿವಿಧ ವಸತಿ ಯೋಜನೆಗಳಡಿ ಪ್ರಗತಿಯಲ್ಲಿರುವ ಮನೆಗಳ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಾಗ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಎಂಬ ಎರಡು ಪರಿಶೀಲನಾ ವಿಧಾನಗಳ ಮೂಲಕ ಅನುದಾನ ಬಿಡುಗಡೆ ಆಗುತ್ತಿದ್ದು, ಇದರಿಂದ ಆಗುವ ವಿಳಂಬವನ್ನು ತಪ್ಪಿಸಲು ಮೇಲ್ಕಂಡ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಅನ್ನು ಒಗ್ಗೂಡಿಸಿ, |
| (ಇ) | ಬಂದಿದ್ದಲ್ಲಿ, ಪ್ರಗತಿಗೆ ಅನುಗುಣವಾಗಿ ಹಂತವಾರು ತ್ವರಿತವಾಗಿ ಫಲಾನುಭವಿಗಳಿಗೆ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ಒದಗಿಸುವುದು) | |

| | | |
|---|---|---|
| | | ಇಂದಿರಾ ವಿಜಿಲ್ ಆಪ್ ಎಂಬ ನೂತನ ತಂತ್ರಾಂಶವನ್ನು ಅಳವಡಿಸಲಾಗಿದ್ದು, ಫಲಾನುಭವಿಗಳಿಗೆ ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗಿದೆ. |

ಸಂಖ್ಯೆ :ವಇ 292 ಹೆಚ್‌ಎಎಂ 2021

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು